# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 147

ಸದಸ್ಯರ ಹೆಸರು : ಶ್ರೀ ಮುನಿರಾಜು ಗೌಡ ಪಿ.ಎಂ(ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 13.09.2021

ಉತ್ತರಿಸುವ ಸಚಿವರು : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊರೋನಾ ಸಾಂಕ್ರಾಮಿಕ ಅವಧಿಯಲ್ಲಿ ವಿದ್ಯಾರ್ಥಿಗಳಿಗೆ ಆನ್‌ಲೈನ್ ಮೂಲಕ ತರಗತಿಗಳನ್ನು ಮಾಡುತ್ತಿದ್ದು, ಗ್ರಾಮೀಣ ಹಾಗೂ ಹಳ್ಳಿ ಪ್ರದೇಶಗಳಲ್ಲಿನ ವಿದ್ಯಾರ್ಥಿಗಳು ನೆಟ್‌ವರ್ಕ್ ಸಮಸ್ಯೆಯಿಂದಾಗಿ ಶಿಕ್ಷಣವನ್ನು ಪಡೆಯಲು ಸಾಧ್ಯವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ ಈ ಸಮಸ್ಯೆಯನ್ನು ಬಗೆಹರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | 1. 2020-21ನೇ ಸಾಲಿನಲ್ಲಿ ಕೋವಿಡ್ -19 ಸಾಂಕ್ರಾಮಿಕ ರೋಗದ ಪ್ರಯುಕ್ತ ಶಾಲೆಗಳು ಪ್ರಾರಂಭ ಮಾಡಲು ಸಾಧ್ಯವಾಗಿರುವುದಿಲ್ಲ. ಆದ ಕಾರಣ 1 ರಿಂದ 10ನೇ ತರಗತಿ ವಿದ್ಯಾರ್ಥಿಗಳಿಗೆ ರೇಡಿಯೋ ಹಾಗೂ ದೂರದರ್ಶನ ಚಂದನ ವಾಹಿನಿಯಲ್ಲಿ ಸಂವೇದ ಕಾರ್ಯಕ್ರಮದ ಮೂಲಕ ಎಲ್ಲಾ ವಿಷಯದ ಪಾಠಗಳನ್ನು ನುರಿತ ಶಿಕ್ಷಕರಿಂದ ಪ್ರಸಾರ ಮಾಡಲಾಗಿದೆ.<br>2. ಸಂವೇದ ಕಾರ್ಯಕ್ರಮವನ್ನು ಯು-ಟ್ಯೂಬ್ ಚಾನಲ್-ಮಕ್ಕಳವಾಣಿ, ಡಿ.ಎಸ್.ಇ.ಆರ್.ಟಿ.ಯ-ಜ್ಞಾನದೀಪ ಮತ್ತು ದೀಕ್ಷಾ ಪೋರ್ಟಲ್ ನಲ್ಲಿ ಅಪ್ಲೋಡ್ ಮಾಡುವ ಮೂಲಕ ವಿದ್ಯಾರ್ಥಿಗಳು ಪಾಠಗಳನ್ನು ಹಲವಾರು ಬಾರಿ ವೀಕ್ಷಿಸಲು ಅವಕಾಶ ಕಲ್ಪಿಸಲಾಗಿದೆ.<br>3. ಆಕಾಶವಾಣಿ ರೇಡಿಯೋ ಕಾರ್ಯಕ್ರಮದಲ್ಲಿ ಬೆಳಿಗ್ಗೆ 10.00 ರಿಂದ 10.15ರವರಗೆ 1 ಮತ್ತು 2ನೇ ತರಗತಿ ವಿದ್ಯಾರ್ಥಿಗಳಿಗೆ ಮತ್ತು 10.15 ರಿಂದ 10.30ರವರಗೆ 3 ಮತ್ತು 4ನೆ ತರಗತಿ ವಿದ್ಯಾರ್ಥಿಗಳಿಗೆ ಡಿ.ಎಸ್.ಇ.ಆರ್.ಟಿ.ರವರು ತಯಾರಿಸಿದ ಆಡಿಯೋ ಪಾಠಗಳನ್ನು ಪ್ರಸಾರ ಮಾಡಲಾಗಿದೆ. ಇದೇ ಪಾಠಗಳನ್ನು ರಾಜ್ಯದ ಎಫ್.ಎಂ. |

| | | |
|---|---|---|
| | | ರೇನ್‌ಬೋ ರೇಡಿಯೋ ಚಾನಲ್ ನಲ್ಲಿ ಮರುಪ್ರಸಾರ ಮಾಡಲಾಗಿದೆ.<br>4. ದೀಕ್ಷಾ ಪೋರ್ಟಲ್ ನಲ್ಲಿ 1 ರಿಂದ 10ನೇ ತರಗತಿಯ ಎಲ್ಲಾ ವಿಷಯಗಳನ್ನು ಕನ್ನಡ ಮತ್ತು ಇಂಗ್ಲೀಷ್ ಮಾಧ್ಯಮದಲ್ಲಿ ಸರಿಸುಮಾರು 22,000 ಸಾವಿರಕ್ಕೂ ಹೆಚ್ಚು ಪಠ್ಯ ಪುಸ್ತಕವನ್ನು ಇ-ಕಂಟೆಂಟ್ ಮೂಲಕ ಅಪ್ಲೋಡ್ ಮಾಡಲಾಗಿದೆ ಹಾಗೂ 1 ರಿಂದ 12ನೇ ತರಗತಿಯ ಪಠ್ಯ ಪುಸ್ತಕದ ಇ-ಕಂಟೆಂಟ್ ಗಳಿಗೆ QR code ತಯಾರಿಸಿ ಹೆಚ್ಚುವರಿ ಮಾಹಿತಿಗಳನ್ನು ಸಂಗ್ರಹಿಸಿ ಅವುಗಳನ್ನು ಬಲವರ್ಧನೆ(energized) ಮಾಡಿ ಮಕ್ಕಳ ಕಲಿಕೆಗೆ ಮತ್ತು ಎಲ್ಲಾ ವಿಷಯದ ಪಠ್ಯ ಪುಸ್ತಕವನ್ನು ಹಲವಾರು ಬಾರಿ ಓದಲು ಅನುಕೂಲ ಮಾಡಿಕೊಡಲಾಗಿದೆ. |
| ಇ) | 2020-21ನೇ ಸಾಲಿನಲ್ಲಿ ಎಷ್ಟು ವಿದ್ಯಾರ್ಥಿಗಳಿಗೆ ಮೊಬೈಲ್ ಸೆಟ್ ನೀಡಲಾಗಿದೆ?(ಜಿಲ್ಲಾವಾರು ಮಾಹಿತಿ ನೀಡುವುದು) | ಸರ್ಕಾರದಿಂದ ವಿದ್ಯಾರ್ಥಿಗಳಿಗೆ ಮೊಬೈಲ್ ಸೆಟ್ ನೀಡಿರುವುದಿಲ್ಲ. |

ಇಪಿ 137 ಎಂ.ಹೆಚ್.ಟಿ 2021

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು